ಜೂನ್ 2019

WCG
Wildlife Conservation Group

## ಲೇಖನಗಳು






**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಭಗವತಿ ಬಿ. ಎಮ್.

**ಪರಿಷ್ಕರಣೆ**

ಮುರಳಿ ಎಸ್.
ಅನನ್ಯರೂಪ

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು

# ಬೆಪ್ಪಾಲೆ

**ಸಾಮಾನ್ಯ ಹೆಸರು:** Dyers's oleander

**ವೈಜ್ಞಾನಿಕ ಹೆಸರು:** Wrightia tinctoria



© ಅಶ್ವಥ ಕೆ.ಎನ್. ಬೆಪ್ಪಾಲೆ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಬೆಪ್ಪಾಲೆ ಭಾರತ ಮತ್ತು ಬರ್ಮಾ ದೇಶದಲ್ಲಿ ಬೆಳೆಯುವ ಸ್ಥಳೀಯ ಮರ. ಇದು ಶುಷ್ಕ ಎಲೆ ಉದುರುವ ಕಾಡುಗಳಲ್ಲಿ ಕಲ್ಲುಬಂಡೆಗಳ ನಡುವೆ ಬೆಳೆಯುವ ಮರ. ಬೆಪ್ಪಾಲೆ ಮರ ಮೂರರಿಂದ ಹದಿನೈದು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಮಾರ್ಚ್, ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ತಿಳಿಹಸಿರು ಎಲೆಗಳ ಜೊತೆಯಲ್ಲಿ ಮುತ್ತಿನಂತಹ ಬಿಳಿಯ ಹೂವುಗಳು ಮರದ ತುಂಬ ಬಿಡುತ್ತವೆ. ತೊಗಟೆಯು ಹಳದಿ-ಕಂದು ಬಣ್ಣದಿಂದ ಕೂಡಿದ್ದು, ಸೀಳಿದಾಗ ಹಾಲಿನಂತಹ ದ್ರವ ಧಾರಾಕಾರವಾಗಿ ಸುರಿಯುತ್ತದೆ. ಎಳೆಯ ಕಾಂಡ ಹಳದಿ ಬಣ್ಣಕ್ಕಿರುತ್ತದೆ. ಈ ಮರದ ಹಣ್ಣು ಕಪ್ಪು ಮಿಶ್ರಿತ ಹಸಿರು, ಹಣ್ಣಿನ ಮೇಲೆ ಬಿಳಿಮಚ್ಚೆಗಳಿದ್ದು ಉದ್ದಕ್ಕೆ ಕೊಂಬಿನಂತಿದ್ದು ತುದಿಯಲ್ಲಿ ಕೂಡಿಕೊಂಡಿರುತ್ತವೆ. ಚಪಟ್ಟೆಯಾಗಿರುವ ಕಂದು ಬಣ್ಣದ ಬೀಜಗಳು ಬಿಳಿಯ ಕೂದಲಿನ ಗೊಂಚಲನ್ನು ಹೊಂದಿರುತ್ತವೆ. ಹಣ್ಣು ಆಲಿಪ್ಪೆ (ಹೊಲ್ಲರೇನ ಪ್ಯೂಬಿಸೆನ್ಸ್) ಹಣ್ಣನ್ನು ಹೋಲುತ್ತದೆ, ಆದರೆ ತುದಿಯಲ್ಲಿ ಕೂಡಿಕೊಂಡಿರುತ್ತದೆ. ತುದಿ ಕೊಂಬೆಯಲ್ಲಿ ಎಲೆಗಳು ಎದುರುಬದರಾಗಿ ವ್ಯವಸ್ಥಿತವಾಗಿರುತ್ತದೆ. ಸುಮಾರು 18 cm ಉದ್ದದ ಕೊಂಬೆಗಳಿಲ್ಲದ ನೇರವಾದ ರೆಂಬೆಯಾಗಿರುತ್ತದೆ. ವಿಶೇಷವಾಗಿ ಎಲೆಗಳು ಚಿಕ್ಕದಾಗಿದ್ದಾಗ ಸ್ವಲ್ಪ ನೀಲಿ-ಹಸಿರು ಬಣ್ಣದಿಂದ ಕೂಡಿದ್ದು, ನಯವಾಗಿರುತ್ತವೆ. ಆಯುರ್ವೇದದಲ್ಲಿ ಒಂದು ವಿಶೇಷವಾದ ಔಷಧೀಯ ಸಸ್ಯವಾಗಿದೆ. ಆಯುರ್ವೇದದ ಪ್ರಕಾರ ಇದರ ತೊಗಟೆಗಳು ಅತಿಸಾರ, ರಾಶಿಗಳು ಮತ್ತು ಜಂತುಹುಳ ಚಿಕಿತ್ಸೆ ಇನ್ನಿತರ ಚರ್ಮ ರೋಗಗಳ ಚಿಕಿತ್ಸೆಯಲ್ಲಿ ಉಪಯುಕ್ತವಾಗಿದೆ. ಇದರ ಬೀಜಗಳು ಅತಿಸಾರ ನಿಷೇಧಕ ಗುಣಲಕ್ಷಣಗಳನ್ನು ಹೊಂದಿವೆ ಮತ್ತು ಅವುಗಳನ್ನು astringents, antihelminthics, ಕಾಮೋತ್ತೇಜಕಗಳು ಮತ್ತು ಜ್ವರವನ್ನು ಕಡಿಮೆ ಮಾಡಲು ಬಳಸಲಾಗುತ್ತದೆ. ತೊಗಟೆ ಮತ್ತು ಬೀಜಗಳನ್ನು ವಾಯುಪರಿಚಲನಾ ಚಿಕಿತ್ಸೆಗೆ ಬಳಸಲಾಗುತ್ತದೆ. ತೊಗಟೆಯಿಂದ ತೆಗೆದ ಸಾರವು ಹಾವಿನ ಕಡಿತಕ್ಕೆ ಪ್ರತಿವಿಷವಾಗಿ ಬಳಸಲಾಗುತ್ತದೆ. ಮೂತ್ರಪಿಂಡ ಕಲ್ಲುಗಳ ಚಿಕಿತ್ಸೆಯಲ್ಲಿ ತೊಗಟೆಯ ಪುಡಿಯನ್ನು ಬಳಸುತ್ತಾರೆ.


© ಶಶಿಧರಸ್ವಾಮಿ ಆರ್. ಹಿರೇಮಠ

# ಓತಿ ಬಣ್ಣದ ತೊಗಲಂಗಿ ತೊಟ್ಟಾಗ...

ಬಳ್ಳಾರಿಯ ಮೂಕಾ ಹತ್ತಿರದ ಪಕ್ಷಿಗಳ ಛಾಯಾಗ್ರಹಣ ಮುಗಿಸಿಕೊಂಡು ಬೈಕಿನಲ್ಲಿ ನಾನು, ಕಾಶಿನಾಥ ಮತ್ತು ನಿಜಗುಣಸ್ವಾಮಿ ಮನೆಗೆ ಮರಳಿ ಬರುತ್ತಿದ್ದೆವು. ರಸ್ತೆಯ ಇಕ್ಕೆಲಗಳಲ್ಲಿ ನೆಟ್ಟ ಗಿಡಕ್ಕೆ ಆಸರೆಗಾಗಿ ನಿಲ್ಲಿಸಿದ ಒಂದು ಕಟ್ಟಿಗೆ ಗೂಟದ ತುದಿಯಲ್ಲಿ ಕೂತ ಓತಿಯನ್ನು ನೋಡಿ ತಕ್ಷಣ ಬೈಕನ್ನು ನಿಲ್ಲಿಸಲು ತಿಳಿಸಿದೆ. ಕ್ಯಾಮರವನ್ನು ಅದರತ್ತ ಗುರಿಮಾಡಿ ನೋಡಿದಾಗ ಅದು ನಾನಾ ಬಣ್ಣದ ತೊಗಲಂಗಿ ತೊಟ್ಟು ಯಾರಿಗೋ ಕಾದು ಕುಳಿತಂತಿತ್ತು. ತೊಗಲಂಗಿ ಕಳಚುವುದರೊಳಗೆ ಫೋಟೊ ಕ್ಲಿಕ್ಕಿಸಿಕೊಳ್ಳಬೇಕೆಂದು ನಿಧಾನವಾಗಿ ಬೈಕಿನಿಂದ ಇಳಿದು ಕಳ್ಳ ನಡಿಗೆ ನಡೆದು ಬೈಲು ಹೊಲವನ್ನು ಹಿನ್ನೆಲೆಯಾಗಿ ಇರಿಸಿಕೊಂಡು ಫೋಟೋ ಕ್ಲಿಕ್ಕಿಸತೊಡಗಿದೆವು.


© ಅಶ್ವಥ ಕೆ.ಎನ್.

ನಾನು ಓತಿಯನ್ನು ಸಾಮಾನ್ಯವಾಗಿ ತಲೆ ಭಾಗವು ಮಾತ್ರ ಕೆಂಪಾಗಿದ್ದನ್ನು ಕಂಡಿದ್ದೆ. ಆದರೆ ಇದು ತಲೆಯ ಭಾಗದಲ್ಲಿ ಕೆಂಪು, ಗಂಟಲಿನಿಂದ ದೇಹದ ಅರ್ಧ ಭಾಗ ಹಾಗೂ ಮುಂಗಾಲು ಕಪ್ಪಾಗಿಯೂ, ದೇಹದ ಇನ್ನರ್ಧ ಭಾಗ ಹಾಗೂ ಹಿಂಗಾಲು ನೀಲಿ ಬಣ್ಣ, ಬಾಲದ ಮೇಲ್ಭಾಗವು ತಿಳಿ ಹಳದಿ ಮತ್ತು ಬಾಲವು ಹಳದಿ ಹಾಗೂ ಕಪ್ಪು ಪಟ್ಟೆಗಳ ಬಣ್ಣ ಬಣ್ಣದ ತೊಗಲಂಗಿ ತೊಟ್ಟು ನಿಂತು ಪ್ರೇಯಸಿಗಾಗಿ, ಮತ್ತೊಂದು ಗಂಡಿನೊಂದಿಗೆ ಗುದ್ದಾಡಲು ಅಣಿಯಾದಂತಿತ್ತು.

ಈ ಬಣ್ಣ ಬದಲಿಸುವ ಪ್ರಕ್ರಿಯೆಯು ಲೈಂಗಿಕ ಆಕರ್ಷಣೆಗಾಗಿ ಇಲ್ಲವೇ ಎರಡು ಬಲಿಷ್ಠ ಗಂಡು ಓತಿಗಳ ನಡುವಿನ 'ಮಿಲನಪೂರ್ವ', ಹೋರಾಟಕ್ಕಾಗಿ ಗೆದ್ದ ಗಂಡು ಓತಿಯೂ ಹೆಣ್ಣು ಓತಿಯನ್ನು ಸೇರುತ್ತದೆ. ಗಂಡು ಓತಿಗಳ ಈ ನಡುವಳಿಕೆಯು ಒಂದಕ್ಕಿಂತ ಹೆಚ್ಚು ಸಂದೇಶ ಸ್ವೀಕೃತದಾರರೊಂದಿಗೆ ಸಂವಹನವನ್ನು ಹೊರಹಾಕಿ ಜೊತೆಗಾತಿಯನ್ನು ಹುಡುಕಿ ಎದುರಾಳಿ ಗಂಡು ಓತಿಗಳನ್ನು ಹಿಮ್ಮೆಟ್ಟಿಸಿ ಸಂತಾನೋತ್ಪತ್ತಿಯಲ್ಲಿ ಯಶಸ್ಸನ್ನು

ಹೊಂದುತ್ತವೆ. ವಿವಿಧ ಬಣ್ಣಗಳಿಗೆ ಓತಿಗಳು ಪ್ರತಿ ಸ್ಪಂದಿಸುತ್ತವೆ. ಹೆಣ್ಣು ಓತಿಗಳು "ಕಿತ್ತಳೆ" ಬಣ್ಣಕ್ಕೆ ಸ್ಪಂದಿಸುತ್ತವೆ. ಇಲ್ಲಿ ಕಿತ್ತಳೆ ಬಣ್ಣವು ಹೆಣ್ಣನ್ನು ಪರವಶಗೊಳಿಸಿ ಮಿಲನಕ್ಕಾಗಿ ನಿವೇದಿಸುವ ಬಣ್ಣವಾಗಿ ಹೊರ ಹೊಮ್ಮುತ್ತದೆ. ಗಂಡು ಓತಿಗಳು "ನೀಲಿ ಹಾಗೂ ಕಪ್ಪು" ಬಣ್ಣಕ್ಕೆ ಸ್ಪಂದನೆ ನೀಡುತ್ತವೆ. ಇಲ್ಲಿ ಇದು ತಮ್ಮ ಪೌರುಷತ್ವದ ದ್ಯೋತಕವಾಗಿ







ಎರಡು ಗಂಡು ಓತಿಗಳು ಕಾದಾಟ ಅಥವಾ ಸ್ಪರ್ಧೆಗೆ ಅಣಿಯಾಗಿ ಎದುರಾಳಿಗೆ ನೀಡುವ ಸಂವಹನ ಸಂದೇಶವಾಗಿರುತ್ತದೆ. ಈ ಬಣ್ಣದ ಸಂಕೇತ ಸಂದೇಶಗಳನ್ನು ಹೊರಹೊಮ್ಮಿಸುವುದು ಅವು ತಮ್ಮ ಲೈಂಗಿಕ ದ್ವಿರೂಪತೆ ಮತ್ತು ದ್ವಿವರ್ಣತೆಯು ಅನುವಂಶಿಯವಾಗಿ ವಿಕಸನದಿಂದ ಬಳುವಳಿಯಾಗಿ ಬಂದಿವೆ. ಈ ಗುಣ ಲಕ್ಷಣಗಳನ್ನು ಯಾವ ಓತಿ ಹೊಂದಿರುವುದೋ ಆ ಓತಿ ಬಲು ಸುಲಭವಾಗಿ ಸಂಗಾತಿಯನ್ನು ಪಡೆದುಕೊಳ್ಳುತ್ತವೆ. ಈ ಗುಣ ಲಕ್ಷಣಗಳೇ ವರ್ಣತಂತುಗಳ ಮೂಲಕ ಅನುವಂಶಿಯವಾಗಿ ಮುಂದಿನ ಪೀಳಿಗೆಗೆ ರವಾನೆಯಾಗುತ್ತವೆ.

ಸಮಯವು ಕಳೆದ ಹಾಗೆ ಅದು ತನ್ನ ಬಣ್ಣದ ತೊಗಲಂಗಿಯನ್ನು ನಿಧಾನಗಾಗಿ ಕಳಚುತ್ತಾ ಕಟ್ಟಿಗೆಯ ಗೂಟಕ್ಕೆ ಅಪ್ಪಿಕೊಂಡು ಕುಳಿತುಕೊಂಡಿತು. ಅದರ ಪ್ರತಿ ಹಂತದ ಫೋಟೋ ಕ್ಲಿಕ್ಕಿಸಿಕೊಂಡ ನಾವುಗಳು ಬೈಕ್ ಏರಿ ಮನೆಯತ್ತ ನಡೆದೆವು.

– ಶಶಿಧರಸ್ವಾಮಿ ಆರ್. ಹಿರೇಮಠ

ಕದರಮಂಡಲಗಿ, ಹಾವೇರಿ ಜಿಲ್ಲೆ.



# ಭೂಗತಲೋಕದಿಂದ ಬಂದ ಸಿಕಾಡ

ಬೆಂಕಿಯ ಕೆನ್ನಾಲಿಗೆಗೆ ಸಿಲುಕಿ ನಲುಗಿರುವ ಬಂಡೀಪುರ ಕಾಡು ಮುಂಗಾರಿನ ಸಿಂಚನದಿಂದ ನವೋಲ್ಲಾಸಗೊಂಡಿದೆ. ಬೆಂಕಿಯಲ್ಲಿ ಬೆಂದು ಮಸಣದಂತಾಗಿದ್ದ ಕಾಡಲ್ಲಿ ಹೂ ಅರಳಿ, ಅದರ ಸುಗಂಧ ಕಾಡನ್ನೆಲ್ಲ ಪಸರಿಸುತ್ತಿದೆ. ಮಳೆಯ ಸಿಂಚನದಿಂದ ಕಾಡಿನಲ್ಲಿ ಹೊಸ ಸಂಚಲನಮೂಡಿ ಮರಗಳೆಲ್ಲ ಚಿಗುರಿ ವನದೇವಿ ಹಸಿರ ಸೀರೆಯುಟ್ಟು ಕಂಗೊಳಿಸುತ್ತಿರುವಂತೆ ಇದೆ. ಅಲ್ಲಲ್ಲಿ ನೃತ್ಯ ಮಾಡುತ್ತಿರುವ ನವಿಲುಗಳು ಕಾಡಲ್ಲಿ ಮಳೆ ಹಬ್ಬದ ಸೊಬಗನ್ನ ಸಾರಿ ಹೇಳುತ್ತಿವೆ. ಕಾಡಿನ ಈ ಹೊಸ ಚೇತನವನ್ನು ಕಂಡು ಮನಸ್ಸಿಗೇನೋ ಸಮಾಧಾನದುಸಿರು, ಅಂತೂ ಇನ್ನು ಬೆಂಕಿಯ ಭಯವಿಲ್ಲ. ಜಿಂಕೆಯಾದಿಯಾಗಿ ಸಸ್ಯಾಹಾರಿ ಪ್ರಾಣಿಗಳಿಗೆ ಹಸಿರಿನ ಹುಲ್ಲು ಕೈಬೀಸಿ ಕರೆಯುವಂತೆ ಚಿಗುರಿ ನಿಂತಿದೆ. ಇಷ್ಟು ಲವಲವಿಕೆಯ ಆಗರವಾದ ಕಾಡಿನಲ್ಲಿ ಅಂದು ಸಂಜೆಯ ಸಫಾರಿ ಹಾಗೂ ಹನಿ ಮಳೆ ಎರಡೂ ಮನಸ್ಸಿಗೆ ಒಂಥರಾ ಆಹ್ಲಾದ ನೀಡಿದ್ದಂತೂ ಸುಳ್ಳಲ್ಲ.... ಸಂಜೆ ಸಫಾರಿಯಲ್ಲಿ ತೊಯ್ದು ಹೋಗಿದ್ದರೂ ಮನಸ್ಸಿನಲ್ಲಿ ಏನೋ ಒಂದು ಸಂತಸ. ಸಫಾರಿ ಮುಗಿಸಿ ಬಂದರೂ ಮಳೆ ಜಿನುಗುತ್ತಿತ್ತು. ಬಂದು ಆರಾಮಾಗಿ ವಿಶ್ರಮಿಸಿ ರಾತ್ರಿ ಊಟ ಮುಗಿಸಿ ನಿದ್ದೆಗೆ ಜಾರಿದೆ.

ಮುಂಜಾವು 5.30 ಕ್ಕೆ ಎದ್ದವನೆ ಬೈನಾಕ್ಯುಲರ್ ಅನ್ನು ಹೆಗಲಿಗೆ ಏರಿಸಿ ಜೀಪ್ ಹತ್ತಿ ಸಫಾರಿಗೆ ಹೊರಟೆ. ಕಾನನ ಎಂದರೆ ನಿಶ್ಯಬ್ಧ ಹಾಗೂ ಪ್ರಶಾಂತ ವಾತಾವರಣ. ಆದರೆ ಅಂದು ಸಫಾರಿಯಲ್ಲಿ ಏನೊ ಗದ್ದಲ, ಮರಗಳಿಂದ ಚಿರ್ರನೆ ಚೀರುವ, ಕಿವಿ ಕಿತ್ತುಹೋಗುವಂತಹ ಶಬ್ಧ. ಈ ಶಬ್ಧ ಕೇಳಿದ ನಮ್ಮ ಅತಿಥಿಗಳು "what's that sound" ಎಂದು ಕೇಳಿದರು. ಶಬ್ಧವು ಕೇಳಲು ಕಿವಿಗೆ ಕಿರಿಕಿರಿಯಾಗುತ್ತಿದ್ದರೂ ಒಂಥರಾ ಆಹ್ಲಾದ ನೀಡುತ್ತಿತ್ತು. ಇಂತಹ ಆಹ್ಲಾದ ನೀಡುತ್ತಿದ್ದದ್ದು ಒಂದು ಸಣ್ಣ ಕೀಟ, ಹೌದು ಅದುವೇ ಸಿಕಾಡ.




ಸಿಕಾಡಗಳದ್ದು ವಿಸ್ಮಯಕರವಾದ ಜೀವನ ಚಕ್ರ. ವಿಶ್ವದಾದ್ಯಂತ ಸರಿಸುಮಾರು 3000 ಪ್ರಭೇದ ಸಿಕಾಡಗಳು ಕಾಣಸಿಗುತ್ತವೆ. ಅವುಗಳಲ್ಲಿ 250 ಪ್ರಭೇದದ ಸಿಕಾಡಗಳನ್ನು ನಮ್ಮ ದೇಶದಲ್ಲಿ ಕಾಣಬಹುದಾಗಿದೆ. ಹೆಚ್ಚಾಗಿ ಗಿಡ ಮರಗಳಲ್ಲೇ ವಾಸಿಸುವ ಇವುಗಳು ಸಸ್ಯದ ರಸವನ್ನು (sap) ಹೀರುತ್ತವೆ. ಗಂಡು ಕೀಟವು ಮಾತ್ರ ಈ ರೀತಿಯ ಚಿರ್ರನೆ ಶಬ್ಧ ಮಾಡಬಲ್ಲವು. ಅವು ತನ್ನ ಸಂಗಾತಿಯನ್ನು ಆಕರ್ಷಿಸುವುದಕ್ಕಾಗಿ ತನ್ನ ಹೊಟ್ಟೆಯ ಕೆಳಭಾಗದಲ್ಲಿರುವ ಟಿಂಬಲ್ ಎಂಬ ಅಂಗವನ್ನು ನಿರಂತರವಾಗಿ ಹಿಗ್ಗಿಸಿ-ಕುಗ್ಗಿಸಿ ಶಬ್ಧವನ್ನು ಹೊರಡಿಸುತ್ತವೆ. ಕೆಲವೊಂದು ಸಿಕಾಡಗಳ ಶಬ್ಧ 120 ಡೆಸಿಬಲ್‌ಗಳಷ್ಟಿರುತ್ತದೆ. ಆದರೆ ಮನುಷ್ಯನ ಶ್ರವಣದ ಗರಿಷ್ಟ ಮಿತಿ 80 ಡೆಸಿಬಲ್‌ಗಳು, ಎಂದರೆ ಸಿಕಾಡ ಹೊರಡಿಸುವ ಶಬ್ಧದ ತೀವ್ರತೆ ಅರ್ಥವಾಗುತ್ತದೆ. ಆದರೆ ಎಲ್ಲ ಗಂಡು ಸಿಕಾಡಗಳು ಒಂದೇ ಸಮನೆ ಕೂಗಿ, ಒಂದೇ ಸಮ ಕೂಗುವುದನ್ನು ನಿಲ್ಲಿಸುವುದು ಒಂದು ವಿಸ್ಮಯ. ಇವುಗಳ ಕೂಗಿಗೆ ಆಕರ್ಷಿತವಾದ ಹೆಣ್ಣು ಗಂಡಿನೊಂದಿಗೆ ಮಿಲನ ಕ್ರಿಯೆ ನಡೆಸುತ್ತದೆ. ನಂತರ ಮರಗಳ ತೊಗಟೆಯ ಬಿರುಕಿನಲ್ಲಿ ಮೊಟ್ಟೆಗಳನ್ನಿಡುತ್ತದೆ. ಸಂತಾನೋತ್ಪತ್ತಿ ಕೆಲಸವಾದೊಡನೆ ಈ ಹೆಣ್ಣು ಸಿಕಾಡಗಳು ಸಾಯುತ್ತವೆ.

ಚಿಟ್ಟೆಗಳಂತೆ ಇವುಗಳಲ್ಲಿಯೂ ಕೂಡ 2 ಹಂತದ ಜೀವನ ಕ್ರಮವಿದೆ (metamorphosis).

ಮೊಟ್ಟೆಯು ಒಡೆದು ಹೊರಬರುವ ಮರಿಗೆ (nimph) ರೆಕ್ಕೆಗಳಿರುವುದಿಲ್ಲ.

ಈ ಸಿಕಾಡಗಳಿಗೂ ಶತ್ರುಗಳ ಕಾಟವಿದೆ. ಸಾಮಾನ್ಯವಾಗಿ ಪಕ್ಷಿಗಳು, ಬಾವಲಿ, ಇರುವೆಗಳು, ಮಿಡತೆಗಳು, ಜೇಡ ಮೊದಲಾದವುಗಳು, ಒಂದೇ ಸಮಯದಲ್ಲಿ ಹೆಚ್ಚಾಗುವ ಈ ಸಿಕಾಡಗಳನ್ನು ತಮ್ಮ ದೈನಂದಿನ ಆಹಾರವನ್ನಾಗಿಸಿಕೊಳ್ಳುತ್ತವೆ. ಈ ಶತ್ರುಗಳಿಂದ ತಪ್ಪಿಸಿಕೊಳ್ಳುವ ಸಲುವಾಗಿಯೇ ಹಲವಾರು ಪ್ರಭೇದದ ಸಿಕಾಡಗಳು ತಮ್ಮನ್ನು ತಾವು ಮರೆಮಾಚಿಕೊಳ್ಳಲು ಪಾರದರ್ಶಕ ರೆಕ್ಕೆಗಳನ್ನು ಹೊಂದಿವೆ. ಹಾಗಾಗಿಯೇ ನಾವು ಸಿಕಾಡಗಳನ್ನು ಅಷ್ಟು ಸುಲಭವಾಗಿ ಪತ್ತೆ ಮಾಡಲು ಆಗುವುದಿಲ್ಲ.

– ಮಹದೇವ ಕೆ.ಸಿ.

WCG, ಬೆಂಗಳೂರು.

# ಕಲ್ ಕರಗಿಸುವ ಸಸ್ಯ!

ವಿ. ವಿ. ಅಂಕಣ



ನೀವೇನಾದರೂ ಹಳ್ಳಿಯ ಮುದುಕರ ಬಳಿ ನನಗೆ ಆ ಊಟ ಸೇರುವುದಿಲ್ಲ, ಇದು ಜೀರ್ಣವಾಗದು ಎಂದು ಯಾವುದಾದರು ಸುಸಂದರ್ಭದಲ್ಲಿ ರಾಗ ಎಳೆದರೆ, ನೀವು ತಪ್ಪದೆ ಕೇಳುವ ವಾಕ್ಯವೆಂದರೆ "ಏನ್ರುಲ್ಲಾ ನಿಮ್ ವಯಸ್ನಲ್ಲಿ ನಾನು ಕಲ್ ತಿಂದು ಕರ್ಗುಸ್ಕೋತಿದ್ದೆ, ಈಗಿನ್ ಕಾಲುದ್ ಹೈಕ್ಳು ಏನಕ್ಕೂ ಬ್ಯಾಡ. ತತ್!" ಎಂದು ಶುರುಮಾಡಿ ಅವರ ಹಳೆಯ ಬ್ಲಾಕ್ ಅಂಡ್ ವೈಟ್ ದಿನಗಳ ನೆನಪುಗಳಿಗೆ ಜಾರಿ, ನೀವು ಒಪ್ಪದಿದ್ದರೂ ನಿಮ್ಮನ್ನೂ ಎಳೆದೊಯ್ಯುವರು. ನಂತರ ಆ ಜಾಲದಿಂದ ತಪ್ಪಿಸಿಕೊಂಡು ಬರುವ ದಾರಿ ನಿಮ್ಮ ಜಾಣ್ಮೆಗೆ ಬಿಟ್ಟಿದ್ದು.

ಹಾಗೆಂದರೆ ನಿಜವಾಗಿಯೂ ಆಗಿನ ಕಾಲದ ಹಿರಿಯರು ಕಲ್ಲನ್ನು ತಿಂದು ಕರಗಿಸಿಕೊಳ್ಳುತ್ತಿದ್ದರೆ? ಎಂಬುದಲ್ಲ ಪ್ರಶ್ನೆ ಈಗ. ಏಕೆಂದರೆ ಅದು ನಿಜವೂ ಆಗಿರಬಹುದು, ನಮ್ಮ ಜೀರ್ಣ ಕ್ರಿಯೆಗೆ ಸಹಾಯ ಮಾಡುವ ಆಮ್ಲಗಳು ಸಣ್ಣ ಸಣ್ಣ ಕಲ್ಲುಗಳನ್ನು ಕರಗಿಸಿರಬಹುದು. ಅದೇ...ಯಾವುದಾದರೂ ಒಂದು ಜಾತಿ ಸಸ್ಯ "ಲೋ ಹೈಕ್ಳಾ... ಎಲ್ಲಾ ವಯಸ್ನಲ್ಲೂ ನಾನು ಕಲ್ ತಿಂದು ಕರ್ಗುಸ್ಕೋತೀನಿ ಗೊತ್ತಾ?" ಎಂದರೆ ನಂಬುವಿರಾ?

ನಂಬದಿದ್ದರೆ ಮುಂದೆ ಓದಿ... ಹೌದು ಎಂದು ನಂಬುವುದಾದರೆ ಇಲ್ಲಿಗೆ ನಿಲ್ಲಿಸಿಬಿಡಿ. ಏಕೆಂದರೆ ನಾನು ಮುಂದೆ ಹೇಳುವ ವಿಷಯ ನಿಮಗೆ ಈಗಾಗಲೇ ತಿಳಿದಿದೆ ಎಂದಾಯಿತು.



ನೋಡಿದಿರಾ ಕೆಲವರು ಓದುವುದೇ ನಿಲ್ಲಿಸಿಬಿಟ್ಟರು. ಹೋದವರು ಹೋಗಲಿ ಬಿಡಿ! ನೀವಾದರೂ ಇದ್ದೀರಲ್ಲ. ಮುಂದೆ ಹೋಗೋಣ. ಈ ಮೇಲೆ ಹೇಳಿದಂತೆ ಕೆಲವು ಸಸ್ಯಗಳು ಕಲ್ಲನ್ನು ಕರಗಿಸಿ ಊಟ ಮಾಡಿ ಬದುಕುತ್ತಿವೆ ಎನ್ನುತ್ತಾರೆ ಬ್ರೆಜಿಲ್ ನಲ್ಲಿನ ಒಂದು ವಿಶ್ವವಿದ್ಯಾಲಯದ ಸಸ್ಯವಿಜ್ಞಾನಿ. ಅರೇ ಇದೇನಿದು ಅವರ ಹೆಸರನ್ನೇ ಹೇಳಲಿಲ್ಲ, ವಿ ವಿ ಅಂಕಣದಲ್ಲಿ ಈಗೇನು ಕತೆ ಹೇಳುವುದು ಶುರುಮಾಡಿಬಿಟ್ಟಿರಾ! ಎಂದು ಬೇಸರ ಮಾಡಿಕೊಳ್ಳಬೇಡಿ. ಅವರ ವಿಚಿತ್ರ ಹೆಸರು ಹೇಗೆ ಹೇಳುವುದು ಎಂದು ತಿಳಿಯಲಿಲ್ಲ ಅಷ್ಟೆ. ವಿಷಯಕ್ಕೆ ಬಂದರೆ, ಅಂತಹ ಸಸ್ಯಗಳು ಸಿಗುವುದಾದರೂ ಎಲ್ಲಿ? ಎಂಬ ಪ್ರಶ್ನೆ ನಿಮ್ಮಲ್ಲಿ ಮೂಡಬಹುದು. ಇಂತಹ ಕಲ್ಲನ್ನು ಕರಗಿಸುವ ಸಸ್ಯಗಳು ಸಿಗುವುದು ಬ್ರೆಜಿಲ್ ಮತ್ತು ಆಸ್ಟ್ರೇಲಿಯಾ ದೇಶಗಳ ಗುಡ್ಡಗಾಡು ಪ್ರದೇಶಗಳಲ್ಲಿ ಮಾತ್ರ. ಎಂದರೆ ನಿಮ್ಮ ದಾರಿ ತಪ್ಪಿಸಿದ ಹಾಗಾಗುತ್ತದೆ. ಏಕೆಂದರೆ ನಮ್ಮ ದೇಶದ ಬಂಡೆ ಪ್ರದೇಶಗಳಲ್ಲಿ ಬಂಡೆಗಳ ಮೇಲೆ ಬೆಳೆಯುವ ಸಸ್ಯಗಳೂ ಸಹ ಇದೇ ಉಪಾಯವನ್ನು ಬದುಕಲು ಬಳಸಿಕೊಂಡಿರಬಹುದು. ಹೇಗೆ ಎಂಬುದು ನಿಮಗೆ ಮುಂದೆ ತಿಳಿಯಲಿದೆ.

ನಮ್ಮ ಬ್ರೆಜಿಲ್ ಸಸ್ಯವಿಜ್ಞಾನಿಗಳ ಸಂಶೋಧನೆ ಪ್ರಕಾರ, ಸಸ್ಯಗಳಿಗೆ ಬೇಕಾದ ಪೋಷಕಾಂಶಗಳ ಕೊರತೆ ಇರುವ ಅಥವಾ ಹೆಚ್ಚು ಕಡಿಮೆ ಇಲ್ಲವೇ ಇಲ್ಲ ಎಂದು ನಮಗನ್ನಿಸುವ ಬಂಡೆಗಳ ಮೇಲೆ ಬೆಳೆಯುವ ಸಸ್ಯಗಳು. ತಮಗೆ ಬೇಕಾದ ಪೋಷಕಾಂಶಗಳನ್ನು ಕಲ್ಲನ್ನು ಕರಗಿಸಿ ಪಡೆಯುತ್ತವೆ ಎನ್ನುತ್ತಾರೆ. ಹೌದು! ನಾವು ಮೇಲ್ನೋಟಕ್ಕೆ ನೋಡಿದಾಗ ಬಂಡೆ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯ ಸಸ್ಯಗಳ ಜೀವ ವೈವಿಧ್ಯತೆಯನ್ನು ನೋಡಿರುವುದಿಲ್ಲ. ಆದರೆ ಅದೇ ಸತ್ಯವೆಂದು ನಂಬುವುದಾದರೆ ಅದು ನಮ್ಮ ನಮ್ಮ ಮೂರ್ಖತನ. ಏಕೆಂದರೆ, ಬ್ರೆಜಿಲ್ ನ ಕೇವಲ ಶೇಕಡಾ 1 ಭಾಗ ಆವರಿಸಿರುವ ಬಂಡೆಯುಕ್ತ ಹುಲ್ಲುಗಾವಲಿನಲ್ಲಿ ಆ ದೇಶದ 5000 ವಿವಿದ ಜಾತಿಯ ಸಸ್ಯಗಳಿವೆ. ಎಂದರೆ

ಬ್ರೆಜಿಲ್ ನ ಎಲ್ಲಾ ಸಸ್ಯ ಜೀವವೈವಿಧ್ಯತೆಯಲ್ಲಿ ಶೇಖಡಾ 15 ಭಾಗ. ಹಾಗಾದರೆ ಮಣ್ಣು ಮತ್ತು ಪೋಷಕಾಂಶಗಳ ಕೊರತೆ ಇರುವ ಅಂತಹ ಪ್ರದೇಶದಲ್ಲಿ ಅಷ್ಟು ವೈವಿಧ್ಯ ಸಸ್ಯಜಾತಿ ಹೇಗೆ ಸಾಧ್ಯ? ಎಂಬುದು ಸರಿಯಾದ ಪ್ರಶ್ನೆ.

ಇದೇ ಪ್ರಶ್ನೆ ನಮ್ಮ ವಿಜ್ಞಾನಿಗಳಿಗೂ ಮೂಡಿ, ಅದನ್ನು ತಿಳಿಯಲು ಬಂಡೆ ಕಲ್ಲುಗಳ ಮೇಲೆ ಬೆಳೆಯುವ ಬಾರ್ಬೇಸೀನಿಯ ಟೊಮೆಂಟೊಸಾ ಮತ್ತು ಬಿ.ಮೆಕ್ರಾಂತ ಎಂಬ ಎರಡು ಜಾತಿಯ 30 ಸಸ್ಯಗಳನ್ನು ಪರೀಕ್ಷೆಗೆಂದು ತೆಗೆದುಕೊಂಡರು.



*(a)ಬಾರ್ಬೇಸೀನಿಯ ಟೊಮೆಂಟೊಸಾ* *(b)ಬಿ.ಮೆಕ್ರಾಂತ* *(c)ಕಲ್ಲಿನೊಳಗೆ ಹೋಗಿರುವ ಬೇರುಗಳು*

ಹೀಗೆ ತೆಗೆಯುವಾಗ ಅವರಿಗೆ ಒಂದು ಆಶ್ಚರ್ಯಕರ ವಿಷಯ ತಿಳಿಯಿತು. ಅದೆಂದರೆ ಬಂಡೆಯ ಮೇಲೆ ಬೆಳೆಯುವ ಈ ಸಸ್ಯಗಳ ಬೇರುಗಳು ಬಂಡೆಗಳಲ್ಲೇ ಕನಿಷ್ಟ 10 ಸೆಂ. ಮೀ ಇರುತ್ತಿತ್ತಂತೆ. ಬಂಡೆಯೊಳಗೆ 10 ಸೆಂ ಮೀ ಹೋಗುವುದೆಂದರೆ ಸುಲಭದ ಮಾತೇನು? ಆದರೂ ಹೇಗೋ ಕಷ್ಟಪಟ್ಟು 30 ಸಸ್ಯಗಳನ್ನು ಸಂಗ್ರಹಿಸಿ ಪರೀಕ್ಷೆಗೆ ಒಳಪಡಿಸಿದರು. ಸೂಕ್ಷ್ಮದರ್ಶಕ ಮತ್ತು ರಾಸಾಯನಿಕ ಪರೀಕ್ಷೆಗಳಿಗೆ ಒಳಪಡಿಸಿದ ನಂತರ ಅವರಿಗೆ ಎರಡು ಮುಖ್ಯ ವಿಷಯಗಳು ತಿಳಿದವು. ಆ ಎರಡು ವಿಷಯಗಳೇ ಆ ಸಸ್ಯಗಳ ಅಂತಹ ಪ್ರದೇಶಗಳಲ್ಲಿನ ಉಳಿವಿಕೆಗೆ ಬಲವಾದ ಕಾರಣಗಳು ಎನ್ನಬಹುದು. ಅವೆಂದರೆ...

ಒಂದು : ಸೂಕ್ಷ್ಮದರ್ಶಕದಲ್ಲಿ ಗಮನಿಸಿದಾಗ ಮೊದಲಿಗೆ ತಿಳಿದಿದ್ದು ಆ ಸಸ್ಯಗಳ ಬೇರುಗಳ ತುದಿಯಲ್ಲಿ ಇನ್ನು ಹಲವಾರು ಸೂಕ್ಷ್ಮ ಹಾಗೂ ಅತೀ ಸೂಕ್ಷ್ಮ ಬೇರುಗಳು ಕಂಡುಬಂದವು.

ಎರಡು : ಆ ಸೂಕ್ಷ್ಮ ಬೇರುಗಳಿಂದ ಆ ಸಸ್ಯಗಳು ಮ್ಯಾಲಿಕ್ ಆಮ್ಲ ಮತ್ತು ಸಿಟ್ರಿಕ್ ಆಮ್ಲಗಳನ್ನು ಸ್ರವಿಸುತ್ತಿತ್ತು.

ಹೀಗೆ ಸಸ್ಯಗಳು ಆಮ್ಲಗಳನ್ನು ಸ್ರವಿಸುವ ಮೂಲಕ ಬಂಡೆ ಕಲ್ಲನ್ನು ಕರಗಿಸಿ ಅಲ್ಲಿಂದ ಸಿಗುವ ಸಸ್ಯಾವಶ್ಯಕ ರಂಜಕಗಳನ್ನು ಪಡೆದುಕೊಳ್ಳುತ್ತವೆಯಂತೆ. ಆ ರಂಜಕದ ಸಹಾಯದಿಂದ ಆಹಾರ ತಯಾರಿಸಿಕೊಳ್ಳುತ್ತವೆ. ಹಾಗಾದರೆ ಈ ಸಸ್ಯಗಳು ಒಂದು ರೀತಿಯಲ್ಲಿ ಕಲ್ಲನ್ನು ಕರಗಿಸಿ ಜೀರ್ಣಿಸಿಕೊಂಡಂತೆ ಅಲ್ಲವೇ?




*(a)ಬಾರ್ಬೇಸೀನಿಯ ಟೊಮೆಂಟೊಸಾ ಸಣ್ಣ ಬೇರುಗಳು ಮತ್ತು ಅದೇ ಬೇರು ಎಲೆಕ್ಟ್ರಾನ್ ಮೈಕ್ರೋಗ್ರಫ್ ನಲ್ಲಿ (b)ಬಿ.ಮೆಕ್ರಾಂತ ಬೇರುಗಳು ಮೈಕ್ರೊಗ್ರಾಫ್ ನಲ್ಲಿ*

ಖಂಡಿತ ಹೌದು. ಹಾಗೆಯೇ ಈ ರೀತಿ ರಾಸಾಯನಿಕಗಳನ್ನು ಸ್ರವಿಸಿ ಪೋಷಕಾಂಶಗಳನ್ನು ಪಡೆಯುವ ಬೇರೆ ಸಸ್ಯಗಳೂ ಇದ್ದಾವೆ. ಆದರೆ ಅವು ಯಾವುವೂ ಸಹ ಕಲ್ಲನ್ನು ಕರಗಿಸಿ ಅಲ್ಲಿನ ಪೋಷಕಾಂಶಗಳನ್ನು ಪಡೆದುಕೊಳ್ಳುವುದಿಲ್ಲ. ಬದಲಿಗೆ ರಂಜಕದ ಪ್ರಮಾಣ ಕಡಿಮೆ ಇರುವ ಮಣ್ಣಿನಲ್ಲಿ ಹೀಗೆ ರಾಸಾಯನಿಕ ಶಕ್ತಿ ಬಳಸಿ ರಂಜಕ ಪಡೆಯುತ್ತಿರುವ ಉದಾಹರಣೆಗಳಿವೆ ಅಷ್ಟೆ.

ಅದೆಲ್ಲಾ ಸರಿ. ಹುಂ... ತುಂಬಾ ಒಳ್ಳೆಯ ಸಂಶೋಧನೆ. ಆದರೆ ಇಂತಹ ಸಂಶೋಧನೆಗಳಿಂದ ಏನು ನಿಜವಾದ ಉಪಯೋಗ? ನನಗೇನು ಪ್ರಯೋಜನ? ಎಂಬುದು ತುಂಬ ಒಳ್ಳೆಯ ಪ್ರಶ್ನೆ. ಸಹಜವಾಗಿ ಮೂಡಬೇಕಾದ ಪ್ರಶ್ನೆ.

ಈ ಪ್ರಶ್ನೆಗೆ ಉತ್ತರಿಸುವ ಮುಂಚೆ ಒಂದು ವಿಷಯ ನೀವು ತಿಳಿಯಬೇಕು. ಬ್ರೆಜಿಲ್ ನಲ್ಲಿ ಕಲ್ಲು ಬಂಡೆಗಳ ಮೇಲೆ ಬೆಳೆಯುವ ಈ ಸಸ್ಯಗಳು ಎಷ್ಟು ಪೋಷಕಾಂಶಹೀನ ಪ್ರದೇಶದಲ್ಲಿ ಬೆಳೆಯುತ್ತವೆ ಎಂದರೆ, ಆ ಕಲ್ಲಿನಲ್ಲಿ ಪ್ರತೀ ಗ್ರಾಂ ಗೆ ಕೇವಲ 0.12 ಮಿಲಿ ಗ್ರಾಮ್ ನಷ್ಟು ರಂಜಕ ಮಾತ್ರ ದೊರೆಯುತ್ತದೆ. ಅಂತಹ ಪ್ರದೇಶಗಳಲ್ಲಿಯೇ ಇವುಗಳು ಬದುಕಿ ತೋರಿಸುತ್ತಿವೆ. ಹಾಗಾದರೆ ಸಸ್ಯಗಳ ಈ ಗುಣಗಳನ್ನು ನಾವು ನಮ್ಮ ಬೆಳೆ ಬೆಳೆಯುವ ಸಸ್ಯಗಳಲ್ಲಿ ತಂದರೆ, ಪೋಷಕಾಂಶಹೀನ ಎಷ್ಟೋ ಪ್ರದೇಶಗಳಲ್ಲಿ ಒಳ್ಳೆಯ ಬೆಳೆ ಬೆಳೆಯಬಹುದಲ್ಲವೇ? ರೈತರ ಏಳ್ಗೆಯಾಗುವುದಿಲ್ಲವೇ? ನೀವು ಸಹ ಒಳ್ಳೆಯ ಆಹಾರ ಸೇವಿಸುವ ಹಾಗಾಗುವುದಲ್ಲವೇ? ಒಮ್ಮೆ ಯೋಚಿಸಿ ನೋಡಿ.

ಅಷ್ಟೇ ಅಲ್ಲ! ಇವುಗಳಿಂದ ಒಂದು ಜೀವನ ಪಾಠವನ್ನೂ ಸಹ ಕಲಿಯಬಹುದು. ಎಷ್ಟೋ ಬಾರಿ ಕ್ಷುಲ್ಲಕ ಕಾರಣಳಿಗೆ ಆತ್ಮಹತ್ಯೆ ಮಾಡಿಕೊಂಡು ಸಾವಿನ ಮೊರೆ ಹೋಗುವ ಮೂರ್ಖ ಜೀವಜಾತಿ ನಮ್ಮದಾದರೆ, ಅಷ್ಟು ಕಠಿಣ ಪ್ರದೇಶ-ಪರಿಸ್ಥಿತಿಗಳಲ್ಲಿಯೂ ಸಹ ಜೀವನ ನಡೆಸುವ ಆ ಜೀವಗಳಿಗೆ ಹೋಲಿಸಿದರೆ ನಮ್ಮ ಕಷ್ಟಗಳೆಲ್ಲಿ?!

ScienceNews for Students

–ಜೈಕುಮಾರ್ ಆರ್.
WCG, ಬೆಂಗಳೂರು.

# 2019ರ ಬೇಸಿಗೆ ಶಿಬಿರ



ಕಾಡಿನ ಅಂಚಿನಲ್ಲಿ ವಾಸವಾಗಿರುವ ಜನರಲ್ಲಿ ಅದರಲ್ಲೂ ಮಕ್ಕಳಲ್ಲಿ ಕಾಡಿನ ಬಗ್ಗೆ ಹಾಗು ವನ್ಯಜೀವಿಗಳ ಬಗ್ಗೆ ಅರಿವು ಮೂಡಿಸಲು WCG ತಂಡವು ಹತ್ತು ವರ್ಷಗಳಿಂದ ಹಲವಾರು ಪರಿಸರಪೂರಕ ಕಾರ್ಯಕ್ರಮಗಳನ್ನು ಆಯೋಜಿಸುತ್ತಾ ಬಂದಿದೆ. ಪ್ರತೀ ವರ್ಷವೂ ಶಾಲಾ ಮಕ್ಕಳಿಗೆ ಬೇಸಿಗೆ ಶಿಬಿರ ಆಯೋಜಿಸುವುದು ಈ ನಮ್ಮ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಅದೇ ರೀತಿ ಈ ವರ್ಷವೂ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಸುತ್ತಮುತ್ತ ವಾಸವಿರುವ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ಎರಡು ದಿನದ ಬೇಸಿಗೆ ಶಿಬಿರವನ್ನು 11 ಮತ್ತು 12 ನೇ ಮೇ 2019 ರಂದು ಅಡವಿ ಫೀಲ್ಡ್ ಸ್ಟೇಷನ್ ನಲ್ಲಿ ಆಯೋಜಿಸಲಾಗಿತ್ತು. ವಿವಿಧ ಶಾಲೆಯ ಸುಮಾರು 20 ಹಿರಿಯ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳು ಈ ಶಿಬಿರದಲ್ಲಿ ಪಾಲ್ಗೊಂಡಿದ್ದರು.

ಬೆಳಗ್ಗೆ 9 ಗಂಟೆಗೆ ಅಡವಿ ಫೀಲ್ಡ್ ಸ್ಟೇಷನ್ ಗೆ ಬಂದ ಶಿಬಿರಾರ್ಥಿಗಳನ್ನು ಪರಿಚಯಿಸಿಕೊಂಡ ನಮ್ಮ ತಂಡವು ಪಕ್ಷಿವೀಕ್ಷಣೆಗೆ ಅವರನ್ನು ಕರೆದೊಯ್ಯಲಾಯಿತು. ಸರಿ ಸುಮಾರು ಒಂದು ಗಂಟೆಗಳ ಕಾಲ ವಿವಿಧ ಪಕ್ಷಿಗಳನ್ನು ವೀಕ್ಷಿಸಿ ಬಂದ ಮಕ್ಕಳಿಗೆ ರುಚಿಯಾದ ತಿಂಡಿಯನ್ನು ನೀಡಿ ಮುಂದಿನ ಕಾರ್ಯಕ್ರಮಕ್ಕೆ ಶಕ್ತಿ ತುಂಬಲಾಯಿತು. ನಾಲ್ಕು ಗೋಡೆಗಳ ಮಧ್ಯೆ ಕೂರಿಸಿ ಬೋರ್ಡ್, ಬಳಪ ಗಳನ್ನು ಉಪಯೋಗಿಸಿ ಪಾಠ ಕಲಿಸುವುದು ಮಕ್ಕಳಲ್ಲಿ ಆಸಕ್ತಿಯನ್ನು ಹುಟ್ಟು ಹಾಕುವುದಿಲ್ಲ.

ಅದರ ಬದಲು ಅವರಲ್ಲಿರುವ ಸೃಜನಶೀಲತೆಯನ್ನು ಕಡಿಮೆಗೊಳಿಸುತ್ತದೆ ಎಂದು ನಂಬಿರುವ ನಮ್ಮ ತಂಡವು ಪರಿಸರದ ಎಲ್ಲ ಜೀವಿಗಳ ಹಾಗೂ ಪರಿಸರ ಸಂಪನ್ಮೂಲಗಳ ಮಹತ್ವವನ್ನು ತಿಳಿಸಲು ಹಲವಾರು ಚಟುವಟಿಗಳನ್ನು ವಿನ್ಯಾಸಗೊಳಿಸಿದೆ. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ, ಆಹಾರ ಜಾಲ, ನೀರಿನ ಸರಪಳಿ, ಚಿಟ್ಟೆಗಳ ಬಣ್ಣ, ನಿಸರ್ಗ ಚಿತ್ರಕಲೆ, ನಾಯಿ- ಮೂಳೆ, ಗುಂಪುಗಾರಿಕೆ, ನಟಿಸಿದಂತೆ ನುಡಿ ಇತ್ಯಾದಿ ...



ತಿಂಡಿ ಮುಗಿಸಿದ ಮಕ್ಕಳಿಗೆ ನಮ್ಮ ಈ ಚಟುವಟಿಕೆಗಳ ಮುಖಾಂತರ  ನಮ್ಮ ಸುತ್ತಲಿರುವ ವಿವಿಧ  ಜೀವಿಗಳನ್ನು ಪರಿಚಯಿಸಲಾಯಿತು. ಉದಾಹರಣೆಗೆ ಪ್ರತಿ ಮಗುವನ್ನು ವಿವಿಧ ಜೀವಿಗಳ ಹೆಸರನ್ನು ನೀಡಿ ಪರಿಸರದಲ್ಲಿ ಆ ಜೀವಿಯು ಆಹಾರಕ್ಕಾಗಿ ಯಾವುದರ ಮೇಲೆ ಅವಲಂಬಿತವಾಗಿದೆ ಹಾಗು ಇದರ ಮೇಲೆ ಯಾವ ಜೀವಿ ಅವಲಂಬಿತವಾಗಿದೆ ಅದನ್ನು ಮಕ್ಕಳಲ್ಲಿಯೇ ಕೇಳಿ, ಸಂಬಂಧವಿರುವ ಜೀವಿಗೆ (ಅದೆ ಹೆಸರಿನ ಬೇರೆ ಶಿಬಿರಾರ್ಥಿಗೆ) ದಾರವನ್ನು ಕಟ್ಟಲಾಯಿತು. ನಮ್ಮ ಸ್ವಾರ್ಥದಿಂದ ಭೂಮಿಯಿಂದ ಯಾವುದಾದರೂ ಜೀವಿ ನಿರ್ನಾಮವಾದರೆ ಈ ಆಹಾರ ಕೊಂಡಿ ಹೇಗೆ ಸಡಿಲಗೊಳ್ಳುತ್ತದೆ ಹಾಗು ಪರಿಸರದಲ್ಲಿ ಹೇಗೆ ಅಸಮತೋಲನ ಉಂಟಾಗುತ್ತದೆ ಎಂದು ತೋರಿಸುವ ಚಟುವಟಿಕೆಯನ್ನು ಮಾಡಿಸಲಾಯಿತು.  ಹೀಗೆಯೇ ಸಂಜೆಯ ತನಕ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಮಕ್ಕಳು ಹಲವಾರು ಬಗೆಯ ಜೀವಿಗಳ ಬಗ್ಗೆ ಹಾಗು ನೀರು ಮತ್ತು ಮಣ್ಣಿನ ಮಹತ್ವವನ್ನು ತಿಳಿದುಕೊಂಡರು. ಸಂಜೆಯ ಅಕಾಲಿಕ ಮಳೆಯು ಸಕಲ ಜೀವಿಗಳಲ್ಲಷ್ಟೇ ಅಲ್ಲದೆ ನಮ್ಮ ಶಿಬಿರಾರ್ಥಿಗಳಲ್ಲೂ

ಚೈತನ್ಯವನ್ನು ತುಂಬಿತು. ಮಳೆ ನಿಂತಾಕ್ಷಣ ಪಡುವಣದಲ್ಲಿ ಕೆಂಪಾಗಿ ಮಿನುಗುತ್ತಿದ್ದ ಸೂರ್ಯನನ್ನು ಕಣ್ತುಂಬಿಸಿಕೊಳ್ಳಲು ಪಕ್ಕದಲ್ಲಿಯೇ ಇದ್ದ ಗುಡ್ಡಕ್ಕೆ ಮಕ್ಕಳನ್ನು ಸೂರ್ಯಾಸ್ತ ವೀಕ್ಷಿಸಲು ಕರೆದೊಯ್ಯಲಾಯಿತು.



ಸೂರ್ಯಾಸ್ತ ಗಮನಿಸಿ ಹಿಂತಿರುಗಿದ ಮಕ್ಕಳಿಗೆ ಪರಿಸರಕ್ಕೆ ಸಂಬಂಧಿಸಿದ ಕೆಲವು ಆಟಗಳನ್ನು ಆಡಿಸಲಾಯಿತು. ಸಂಜೆಯ ಊಟವನ್ನು ನೀಡಿದ ಮಕ್ಕಳಿಗೆ, ಮಳೆಯಿಂದ ಎಚ್ಚೆತ್ತು ತಮ್ಮ ಸಂಗಾತಿಗಳನ್ನು ಹುಡುಕುವಲ್ಲಿ ಸಕ್ರಿಯಗೊಂಡಿದ್ದ ಕಪ್ಪೆಗಳನ್ನು ಗಮನಿಸಲು ಅಡವಿ ಫೀಲ್ಡ್ ಸ್ಟೇಷನ್ ನಲ್ಲಿ ಒಂದು ಸುತ್ತು ಕರೆದೊಯ್ದು ವಿವಿಧ ಪ್ರಭೇದದ ಕಪ್ಪೆಗಳ ಬಗ್ಗೆ ಮಾಹಿತಿ ಕೊಡಲಾಯಿತು. ಶಿಬಿರಾರ್ಥಿಗಳು ಬಲು ಕುತೂಹಲದಿಂದ ಕಾಯುತ್ತಿದ್ದ 'ಕ್ಯಾಂಪ್ ಫೈರ್' ಪ್ರಾರಂಭಿಸಿ ಹಲವು ಪರಿಸರ ಗೀತೆಗಳನ್ನು ಹಾಡಲಾಯಿತು ಮತ್ತು ನಮ್ಮ ತಂಡದವರು ತಮ್ಮ ಕಾಡಿನ ಅನುಭವಗಳನ್ನು ಮಕ್ಕಳೊಂದಿಗೆ ಹಂಚಿಕೊಂಡರು.

ನಮ್ಮ ನಿಸರ್ಗದ ಸೌಂದರ್ಯವನ್ನು ನಮ್ಮ ಶಿಬಿರಾರ್ಥಿಗಳಿಗೂ ತೋರಿಸಬೇಕು ಎಂದು ಅವರನ್ನು 12 ನೇ ಭಾನುವಾರ ತಿಂಡಿಯ ನಂತರ ಸುಮಾರು 3 ಕಿ.ಮೀ. ದೂರವಿರುವ ಜಿ.ಡಿ. ಬೆಟ್ಟಕ್ಕೆ ಚಾರಣ ಕರೆದೊಯ್ಯಲಾಯಿತು. ದಾರಿಯುದ್ದಕ್ಕೂ ಕಾಣುವ ಪಕ್ಷಿ, ಮರ, ಕೀಟಗಳ ಬಗ್ಗೆ ತಿಳಿಸಿಕೊಡಲಾಯಿತು. ಮಧ್ಯಾಹ್ನ ಚಾರಣದಿಂದ ಹಿಂತಿರುಗಿದ ಮಕ್ಕಳ ಅನುಭವವನ್ನು ಹಂಚಿಕೊಳ್ಳುವ ಮುಖಾಂತರ ಶಿಬಿರವನ್ನು ಅಂತ್ಯಗೊಳಿಸಲಾಯಿತು.

"ಮುಂದಿನ ಕ್ಯಾಂಪ್ ಯಾವಾಗ ಅಣ್ಣ, ಮತ್ತೆ ಯಾವತ್ತು ಬರ್ಬಹುದು ನಾವು" ಎಂದು ಕೇಳುವ ಮಕ್ಕಳ ಮಾತೇ ಶಿಬಿರದ ಸಾರಾಂಶವನ್ನು ತಿಳಿಸುವಂತಿತ್ತು. ಮಕ್ಕಳಿಗೆ, ಯುವಕರಿಗೆ ಹಾಗೂ ಸಾಮಾನ್ಯ ಜನರಿಗೆ ಪರಿಸರದ ಮಹತ್ವವನ್ನು ತಿಳಿಸಿಕೊಡಲು WCGಯು ಅಡವಿ ಫೀಲ್ಡ್ ಸ್ಟೇಷನ್ ಪ್ರತಿ ತಿಂಗಳು ಒಂದೊಂದು ವಿಭಿನ್ನ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿದೆ. ಆಸಕ್ತರು www.indiawcg.org ಗೆ ಭೇಟಿ ನೀಡಿ ಅಥವಾ

ಸಂಪರ್ಕಿಸಿ 9008261066 (ನಾಗೇಶ್)
9740919832 (ಅಶ್ವಥ್)











– ನಾಗೇಶ್ ಓ. ಎಸ್.

WCG, ಬೆಂಗಳೂರು.

# ಮರ ದೇವತೆ

ಓ ತಾಯಿ ಮರ ದೇವತೆ
ನಿಸ್ವಾರ್ಥ ಸೇವೆಯ ಜಗದೊಡತೆ !!

ಮನುಷ್ಯನಿಗೆ ಹುಟ್ಟಿದಾಗ ತೊಟ್ಟಿಲವಾದೆ
ಸತ್ತಾಗ ಹೊತ್ತೊಯ್ಯುವ  ಬಂಡಿಯಾದೆ
ಜೀವ ಜಂತುಗಳು, ಜೋತ ಭಾವಲಿಗಳು
ಖಗ-ಮೃಗಗಳಾದಿಯಾಗಿ, ಅಸಂಖ್ಯಾತ
ಜೀವ ಪ್ರಭೇದಗಳು !
ನಿನ್ನಾಶ್ರಯದಿ ಒಂದೇ ? ಎರಡೇ ?

ನಿನ್ನ ಚಿಗುರಲೆ ಹೂ ಹಣ್ಣು
ನಿನ್ನಾಶ್ರಯದಿ ಕಟ್ಟುವ ಜೇನು, ಕಿತ್ತಿ ತಿನ್ನುವರು
ಮರಮಟ್ಟು ಆಸೆಗಾಗಿ, ನಿನ್ನ ನೆರಳಲ್ಲೆ ಕುಳಿತು
ಕತ್ತಿ-ಕೊಡಲಿ ಮಸೆದು, ದಣಿವಾರಿದ ಮೇಲೆ
ನಿನ್ನನ್ನೆ ಕಡಿದು ನೆಲಕ್ಕುರುಳಿಸುವರು !

ಗಡಿ-ಭಾಷೆ, ಕುಲ-ಗೋತ್ರಗಳ ಗೊಡ್ಡು ಪ್ರತಿಷ್ಠೆಗೆ
ಜೀವ ತೆತ್ತಿ ರಕ್ತ ಹರಿಸುವರು, ಈ ಜಗದ ಜನರು
ಬುಡ ಕಡಿದರು ಮತ್ತೆ ಚಿಗೊರೆಡೆಯಲೆತ್ನಿಸುವೆ
ನಿನ್ನ ನಿಸ್ವಾರ್ಥ ಸೇವೆ ಮಾಡಲು

ಬುದ್ಧನೇ ಬಂದುದ್ದಲವೇ ನಿನ್ನನ್ನಾ ಶಿಸಿ?
ಪತಂಜಲಿಯು ಪ್ರಖ್ಯಾತಿ ಪಡೆದುದ್ದಲ್ಲವೇ
ನಿನ್ನನ್ನು ಉಪಯೋಗಿಸಿ
ವಿಜ್ಞಾನ-ವೇದ-ಪುರಾಣಗಳೆಲ್ಲ ಹುಟ್ಟಿ
ಬೆಳೆದುದ್ದಲ್ಲವೇ ?
ನಿನ್ನ ಅಕ್ಕರೆಯ ಮಡಿಲಲ್ಲಿ

ಹಸಿರು ಹಂದರದ ವಿಶಾಲ ಭೂಪಥದಲಿ
ಗಿರಿಧರೆಯ ಏರಿಳಿತದಲಿ
ಸ್ಥಿರ ನಿಂತು ವರ ನೀಡುವ
ಮರ ದೇವತೆಯೇ,- ನನ್ನಾಸೆ ಇಷ್ಟೇ
ನನ್ನ ಈ ಜನ್ಮ
ಸಾರ್ಥಕವಾಗುವುದೆಂದಾರೆ
ನಿನ್ನೊಡಲಿನಲ್ಲಿ ಜನಿಸಿ, ನಿನ್ನೊಡನೆ ಇದ್ದು,

ನಿನ್ನನ್ನೆ ಉಪಯೋಗಿಸಿ, ನಿನ್ನಂತಾಗದ
ನನ್ನೀದೇಹ
ಸತ್ತಮೇಲೆ ಸುಟ್ಟರೆ ಬೂದಿಯಾಗಿ ನಿನ್ನ
ಬೇರು ಸೇರಲಿ
ಮಣ್ಣು ಗೂಡಿಸಿದ್ದರೆ ನನ್ನ ಗೋರಿಯ
ಮೇಲೊಂದು ಬೀಜವು
ಮೊಳಕೆ ಒಡೆದು ಹೆಮ್ಮರವಾಗಲಿ !!!

- **ಸೋಮು ಎಚ್. ಹಿಪ್ಪರಗಿ**
ತರಬೇತಾರ್ಥಿ
ಕರ್ನಾಟಕ ರಾಜ್ಯ ಅರಣ್ಯ ಅಕಾಡೆಮಿ
ಧಾರವಾಡ

# ಪ್ರಕೃತಿ ಬಿಂಬ




**Thread legged Bug** © ವಿಪಿನ್ ಬಾಳಿಗ

ಈ ಥ್ರೀ ಲೆಗ್ಗಡ್ ಬಗ್ (Thread Legged Bug) ಗಳು Reduviidae ಕುಟುಂಬಕ್ಕೆ ಸೇರಿದ ಕೀಟವಾಗಿದ್ದು ಇವು ಉಳಿದ Reduviidae ಕುಟುಂಬದ ಪ್ರಭೇದಗಳಿಗಿಂತ ನನ್ನ ತೆಳುವಾದ ದೇಹದಿಂದಾಗಿ ಭಿನ್ನವಾಗಿದೆ. ಇವುಗಳು ತಮ್ಮ ಮಧ್ಯ ಹಾಗು ಹಿಂಗಾಲುಗಳ ಮೇಲೆ ನಡೆಯುತ್ತ ಮುಂಭಾಗದ ಜೋಡಿ ಕಾಲುಗಳನ್ನು ತನ್ನ ಬೇಟೆಯನ್ನು ಹಿಡಿದುಕೊಳ್ಳಲು ಉಪಯೋಗಿಸುತ್ತದೆ. ಈ Thread Legged Bug ಗಳು ಪರಭಕ್ಷಕ ಕೀಟವಾಗಿದ್ದು ಬಂಡೆಗಳಲ್ಲಿ, ಜೇಡರ ಬಲೆಗಳಲ್ಲಿ ಹಾಗು ರಾತ್ರಿ ದೀಪಗಳಲ್ಲಿ ಕಾಣಸಿಗುತ್ತವೆ. ಇವುಗಳಲ್ಲಿ ಹಲವು ಪ್ರಭೇದಗಳು ಉಷ್ಣವಲಯದಲ್ಲಿ ಹೆಚ್ಚಾಗಿ ಕಂಡುಬರುತ್ತವೆ ಹಾಗು ಇವುಗಳಲ್ಲಿ ೯೦೦ ಕ್ಕು ಹೆಚ್ಚು ಪ್ರಭೇದಗಳಿವೆ ಎಂದು ತಿಳಿದು ಬಂದಿದೆ.



**Robber Fly** © ವಿಪಿನ್ ಬಾಳಿಗ

ಗುರಿಯಿಟ್ಟ ಬಾಣದಂತೆ ಒಂದೇ ಗುರಿಯೊಂದಿಗೆ ಕ್ಷಣಮಾತ್ರದಲ್ಲೆ ಹಾರಿ ತಮ್ಮ ಬೇಟೆಯನ್ನು ಅಪಹರಿಸುವ ಇದು ದರೋಡೆ ಫ್ಲೈ ( Robber Fly ) ಎಂದು ಹೆಸರುವಾಸಿಯಾಗಿದೆ. ತನ್ನ ಬಲಿಷ್ಠ ಕಾಲುಗಳ ಸಹಾಯದಿಂದ ತಾನು ಯಾವುದೇ ಕೋನದಲ್ಲಾದರು ತನ್ನ ಬೇಟೆಯೊಂದಿಗೆ ನಿಲ್ಲುವ ಸಾಮರ್ಥ್ಯವನ್ನು ಹೊಂದಿದೆ. ತನ್ನ ಗಾತ್ರದ ಕೀಟಗಳನ್ನು ಕೂಡ ಸರಾಗವಾಗಿ ಬೇಟೆಯಾಡುವ ಇವುಗಳು ದೊಡ್ಡ ಕಣ್ಣುಗಳನ್ನು ಹೊಂದಿರುತ್ತವೆ. ಮರಿಗಳು ತೇವಾಂಶವಿರುವ ಸ್ಥಳಗಳಲ್ಲಿ ವಾಸಿಸುತ್ತವೆ, ಹೆಚ್ಚಾಗಿ ಸಸ್ಯಗಳು, ಪೊದೆಯಂತಹ ಪ್ರದೇಶ ಹಾಗು ಹುಲ್ಲುಗಾವಲಿನಂತಹ ಪ್ರದೇಶಗಳಲ್ಲಿ ಕಂಡುಬರುತ್ತವೆ. ಈ ಮೇಲಿರುವ Robber Fly ತನ್ನ ಬೇಟೆಯಾದ ಜೀರುಂಡೆಯನ್ನು ನೆಲಮಟ್ಟದಿಂದ 2-3 ಅಡಿ ಎತ್ತರಕ್ಕೆ ಒಯ್ದಿದೆ.




**ಕಣಜ** © ವಿಪಿನ್ ಬಾಳಿಗ

ಸಾಮಾನ್ಯವಾಗಿ ಕಂಡುಬರುವ ಎಲ್ಲೋ ಜಾಕೆಟ್ಸ್ ಮತ್ತು ಹಾರ್ನೆಟ್ ಗಳು ಕಣಜ ಕುಟುಂಬಕ್ಕೆ ಸೇರಿದ್ದು, ಈ ಕುಟುಂಬದಲ್ಲಿ ಮೊಟ್ಟೆಹಾಕುವ ರಾಣಿಯೊಂದಿಗೆ ಸಂತಾನೋತ್ಪತ್ತಿ ಮಾಡದ ಕಾರ್ಮಿಕ ಕಣಜಗಳಿರುತ್ತವೆ. ಕಣಜಗಳಲ್ಲಿ ಸಾವಿರಾರು ಪ್ರಭೇದಗಳಿದ್ದು ಇವುಗಳು ಜೇನು ಹುಳು ಹಾಗು ಇರುವೆಗಳಿಗಿಂತ ವಿಭಿನ್ನವಾದವು. ಕೆಲ ವಯಸ್ಕ ಕಣಜಗಳು ಹೂವಿನ ಮಕರಂದ ಹೀರಿದರೆ, ಹೆಚ್ಚಿನ ಸಂಖ್ಯೆಯ ಕಣಜಗಳು ಕೀಟಗಳನ್ನು ಆಹಾರವನ್ನಾಗಿಸುತ್ತವೆ. ಕಣಜಗಳು ಪರಾಗಸ್ಪರ್ಶದಲ್ಲಿ ಹೆಚ್ಚಾಗಿ ಭಾಗಿಯಾಗುವುದಿಲ್ಲ ಕಾರಣ ಉಳಿದ ಕೀಟಗಳಾದ ಜೇನುಹುಳು ಹಾಗು ಚಿಟ್ಟೆಗಳ ಹಾಗೆ ಕೇಸರವನ್ನು ಅಂಟಿಸಿಕೊಳ್ಳಲು ಕೂದಲುಗಳಿಲ್ಲ ನಯವಾದ ದೇಹವಾದ್ದರಿಂದ ಕೇಸರವು ಅಂಟುವುದಿಲ್ಲ. ಸುಮಾರು 1000 ಪ್ರಭೇದದ ಕಣಜಗಳಲ್ಲಿ ಫಿಗ್ ಕಣಜ ( Fig wasp ) ಮಾತ್ರ ತಾನು ಅವಲಂಬಿತ ಗಿಡ-ಮರಗಳನ್ನು ಉಳಿಸಿಕೊಳ್ಳಲು ಪರಾಗಸ್ಪರ್ಶ ನಡೆಸುತ್ತದೆ.

**ಉದಾಹರಣೆಗೆ :** ಅತ್ತಿಮರ ( ಫಿಗ್ ಟ್ರೀ )




ಜೀರುಂಡೆ © ವಿಪಿನ್ ಬಾಳಿಗ

ಜೀರುಂಡೆಗಳು ಕ್ಯರ್ಕಲೋಯೊಯಿಡಿಯಾ (Curculionoidea) ಕುಟುಂಬಕ್ಕೆ ಸೇರಿದ ಒಂದು ಬಗೆಯ ಜೀರುಂಡೆಗಳಾಗಿವೆ. ಅನೇಕ ಜೀರುಂಡೆಗಳನ್ನು ಕೀಟಗಳೆಂದು ಹೇಳಲಾಗುತ್ತದೆ. ಕಾರಣ ಅವುಗಳು ರೈತರ ಬೆಳೆಗಳನ್ನು ಹಾಳುಮಾಡುವುದರಿಂದ ಹಾಗು ಹಾಳುಮಾಡುವ ಸಾಮರ್ಥ್ಯ ಹೊಂದಿರುವುದರಿಂದ. ಹೆಚ್ಚಾಗಿ ಹತ್ತಿಮರದ ಹತ್ತಿಯೊಳಗೆ ಮೊಟ್ಟೆಗಳನ್ನಿಡುತ್ತವೆ, ಲಾರ್ವಗಳು ಹತ್ತಿಯನ್ನು ತಿಂದು ಹೊರಬರುತ್ತವೆ. ಕೆಲ ಜೀರುಂಡೆಗಳನ್ನು ಕಳೆ ಸಸ್ಯಗಳ ನಿಯಂತ್ರಣಕ್ಕಾಗಿ ಬಳಸಲಾಗುತ್ತದೆ. ಹಲವು ಪ್ರಭೇದಗಳು ಹಾರಡುವ ಸಾಮರ್ಥ್ಯ ಹೊಂದಿದ್ದು ಇವುಗಳಲ್ಲಿ ಕೆಲ ಪ್ರಭೇದಗಳು ಕ್ಯರ್ಕಲೋಯೊಯಿಡಿಯಾ ಕುಟುಂಬಕ್ಕೆ ಸೇರದಿದ್ದರೂ ಅವುಗಳನ್ನು ಜೀರುಂಡೆಯೆಂದೇ ಕರೆಯಲಾಗುತ್ತದೆ.

**ಉದಾಹರಣೆಗೆ :** ಬಿಸ್ಕತ್ ವೀವಲ್ (biscuit weevil) ಇದು Ptinidae ಕುಟುಂಬದ ಜೀರುಂಡೆ

ಛಾಯಾಚಿತ್ರಗಳು : ವಿಪಿನ್ ಬಾಳಿಗ
ಲೇಖನ : ಧನರಾಜ್ ಎಂ.

# ನೀವೂ ಕಾನನಕ್ಕೆ ಬರೆಯಬಹುದು




ಜೂನ್ ತಿಂಗಳು ಕಾಲಿರಿಸಿದೆ, ಕಾಡಿನ ಜೀವನದಲ್ಲಿ ಬದಲಾವಣೆ ತರಲಿದೆ. ನವಿಲು ಗರಿಗೆದರಿ ನರ್ತಿಸತೊಡಗಿದರೆ ಕಾಡಿಗೆ ಮುಂಗಾರು ಮಳೆಯ ಆಗಮನ ನಿಶ್ಚಯ ಎಂದು ಒಂದು ನಂಬಿಕೆ. ಮಳೆ ಎಂದರೆ ಹಾಗೇನೇ, ಎಲ್ಲರ ಮನಸ್ಸಿಗೂ ಖುಷಿಯ ಔತಣ ಬಡಿಸುತ್ತದೆ. ಅದರಲ್ಲೂ ಭೂಮಿಗೆ... ಇಷ್ಟು ದಿನಗಳ ಕಾಲ ಬಿಸಿಲಿನ ಬೇಗೆಗೆ ತತ್ತರಿಸಿ, ಬಿಸಿಯುಸಿರನ್ನು ಹೊರ ಹಾಕುತ್ತಾ, ಇನ್ನೂ ನನ್ನಿಂದ ಸಹಿಸಲು ಆಗದು ಎಂದು ಆಗಸದ ಕಡೆ ಮುಖ ಮಾಡಿ, ಮಳೆಯನ್ನು ಆಮಂತ್ರಿಸಲು ಕಾತುರದಿಂದ ಕಾಯ್ದು ಕುಳಿತುಕೊಂಡಿದೆ. ಆದರೆ ಕರಿ ಮೋಡಗಳು ಮಾತ್ರ ಗಿರಿ-ಶಿಖರಗಳ ಮಧ್ಯೆ ಧರೆಯ ಕಡೆ ಮಂದಹಾಸ ಬೀರುತ್ತಾ ಸ್ವಚ್ಛಂದ ಆಕಾಶದಲ್ಲಿ ತೇಲಾಡುತ್ತಿರುತ್ತವೆ. ಯಾವಾಗ ಅವುಗಳ ತೂಕ ಜಾಸ್ತಿಯಾಗುತ್ತದೋ, ಕೊನೆಗೆ ಆರ್ಭಟಿಸುತ್ತ, ಮಿಂಚಿಸುತ್ತ ಹನಿಯಾಗಿ ಧರೆಗೆ ಸೇರುತ್ತಾ, ಬಿಸಿ ಬಿಸಿ ಇಳೆಯನ್ನು ಹಸಿಯಾಗಿ ಮಾಡುತ್ತದೆ. ಇಷ್ಟಕ್ಕೂ ಮಳೆಯೇನು ಬರುವುದು ಮೇಲಿನಿಂದಲ್ಲ, ಕೆಳಗಿನಿಂದಲೇ ಅಂದರೆ ಆಶ್ಚರ್ಯವಾಗಬೇಕಲ್ಲ, ಆಗಲೇಬೇಕು! ಏಕೆಂದರೆ ಇಳೆಯಲ್ಲಿರುವ ನೀರು ಆವಿಯಾಗಿಯೇ ಮೋಡಗಳಾಗುವುದು ಮತ್ತೆ ಮೋಡದಿಂದ ಹನಿಯಾಗಿ ಧರೆ ಸೇರುವುದು. ಇದನ್ನು ಜಲಚಕ್ರ ಎಂದು ಕರೆಯುತ್ತಾರೆ.

ಕೊನೆಗೂ ಮಳೆಯು ಭುವಿಯ ಸೇರಿತೆಂದರೆ, ಇಷ್ಟು ದಿನ ನೆಲದಲ್ಲಿ ಅವಿತು ಕುಳಿತಿದ್ದ ಬೀಜಗಳೆಲ್ಲಾ ಮೊಳಕೆಯೊಡೆದು "ನಾನು ಹೊರಗೆ ಬಂದೆ" ಎಂದು ಕೇಕೇ ಹಾಕುತ್ತವೆ. ಇಷ್ಟು ದಿನ ನೀರಿಗಾಗಿ ಪರದಾಡುತ್ತಿದ್ದ ಜೀವ ಸಂಕುಲಗಳು ಮಳೆಯ ಹನಿಗಳನ್ನು ನೋಡಿ ತನ್ನ ಮನದ ಮೂಲೆಯಲ್ಲಿ ಅಡಗಿ ಕುಳಿತಿದ್ದ ಖುಷಿಯನ್ನು ನೃತ್ಯದ ಮೂಲಕವೋ, ಜಿಗಿಯುವ ಮೂಲಕವೋ ಅಥವಾ ಮಳೆಯಲ್ಲಿ ಮಿಂದುವ ಮೂಲಕವೋ ತಮ್ಮ ಖುಷಿಯನ್ನು ಹೊರ ಹಾಕುತ್ತವೆ. ಇನ್ನು ಕಪ್ಪೆಗಳಂತೂ ಸಂಗೀತದ ಕಛೇರಿಯನ್ನೇ ಶುರುಮಾಡಿಬಿಡುತ್ತವೆ. ಸೂರ್ಯನ ಕಿರಣ ಮಳೆ ಹನಿಗಳ ಮೇಲೆ ಬಿದ್ದಾಗ, ರಂಗು ರಂಗಾದ ಕಾಮನ ಬಿಲ್ಲನ್ನು ಆಕಾಶದಲ್ಲಿ ಮೂಡಿಸುತ್ತದೆ. ಕೊನೆಗೆ ಮಳೆ ಹನಿಗಳು ನೀರಿನ ಮೂಲಗಳಲ್ಲಿ ಸೆರೆಯಾಗುತ್ತದೆ. ಮಳೆಯು ಪ್ರಕೃತಿ ಮಾತೆಗೆ ಹೊಸ ಶೋಭೆಯನ್ನೇ ತಂದುಕೊಡುತ್ತದೆ. ಆ ಶೋಭೆಯನ್ನು ನೋಡಲು ಎರಡು ಕಣ್ಣುಗಳು ಸಾಲದು. ಮನಸ್ಸು ಪ್ರಕೃತಿಮಾತೆಯ ಸೌಂದರ್ಯಕ್ಕೆ ಸೂರೆಗೊಂಡಿರುತ್ತದೆ. ಎಲ್ಲರೂ ಮಳೆಗಾಲವನ್ನು ಸ್ವಾಗತಿಸೋಣ... ಮತ್ತು ಈ ಜೂನ್ ತಿಂಗಳ ಸಂಚಿಕೆಗೆ ಮಳೆ, ಮುಂಗಾರು, ಹಸಿರು ಹಾಗೂ ರೈತನ ಕೃಷಿಯ ತಯಾರಿಗಳು ಜೊತೆಗೆ ಜೀವ ವೈವಿಧ್ಯತೆ ಕುರಿತ, ಕಾಡು, ಕಾಡಿನ ಕತೆಗಳು, ಜೀವ ವಿಜ್ಞಾನ, ವನ್ಯ ವಿಜ್ಞಾನ, ಕೀಟಲೋಕ, ಕೃಷಿ, ವನ್ಯಜೀವಿ ಛಾಯಾಚಿತ್ರಗಳು, ಕವನ (ಪರಿಸರಕ್ಕೆ ಸಂಬಂಧಿಸಿದ), ವರ್ಣಚಿತ್ರಗಳು ಮತ್ತು ಪ್ರವಾಸ ಕತೆಗಳು, ಪರಿಸರಕ್ಕೆ ಸಂಬಂಧ ಪಟ್ಟ ಎಲ್ಲಾ ಲೇಖನಗಳನ್ನು ಆಹ್ವಾನಿಸಲಾಗಿದೆ. ಇ-ಮೇಲ್ ಅಥವಾ ಪೋಸ್ಟ್ ಮೂಲಕ ಕಳಿಸಬಹುದು.

ಈ ಕೆಳಗಿನ ಇ-ವಿಳಾಸಕ್ಕೆ ಲೇಖನಗಳನ್ನು ಇದೇ ಜೂನ್ ತಿಂಗಳ ದಿನಾಂಕ 20 ರೊಳಗೆ ನಿಮ್ಮ ಹೆಸರು ಮತ್ತು ವಿಳಾಸದೊಂದಿಗೆ

kaanana.mag@gmail.com

ಅಥವಾ

Study House,

ಕಾಳೇಶ್ವರಿ ಗ್ರಾಮ,

ರಾಗಿಹಳ್ಳಿ ಅಂಚೆ,

ಜಿಗಣಿ ಹೋಬಳಿ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.

– **ಅಶ್ವಿನಿ ಎಸ್.**
ಬೆಂಗಳೂರು